ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ರಾಜ್ಯ ಪೊಲೀಸ್ ನೇಮಕಾತಿಯ ಕುರಿತು

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

759 (1021) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯ ಪೊಲೀಸ್ ಇಲಾಖೆಯಲ್ಲಿ ಯಾವುದೇ ಹುದ್ದೆಗಳ (PSI, ಖSI, Pಅ...) ನೇಮಕಾತಿ ಮಾಡಿಕೊಳ್ಳುವಾಗ ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿಲ್ಲದಿರುವುದು ನಿಜವೇ ;

(ಆ) ರಾಜ್ಯದ ಲಕ್ಷಾಂತರ ಬಡ ಅಭ್ಯರ್ಥಿಗಳು ಓದು ಮತ್ತು ಕೆಲಸಕ್ಕಾಗಿ ಬೆಂಗಳೂರು, ಧಾರವಾಡ ದಂತಹ ದೂರದ ಊರಿಗೆ ವಲಸೆ ಬರುತ್ತಿದ್ದು ಇಂತಹ ಬಡ ಅಭ್ಯರ್ಥಿಗಳಿಗೆ ಪರೀಕ್ಷೆಯನ್ನು ಬರೆಯಲು ದೂರದ ಊರುಗಳಿಗೆ ಹೋಗಲು ಆರ್ಥಿಕ ಸಮಸ್ಯೆ ಮಾತ್ರವಲ್ಲದೆ ಸಮಯದ ಅಭಾವದಿಂದಾಗಿ ಪರೀಕ್ಷೆಗೆ ಹಾಜರಾಗದೆ ಅವಕಾಶ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) 2018 ರಲ್ಲಿ ಆಂಖ-Pಅ ಪರೀಕ್ಷೆಗೆ ಹಾಜರಾಗಲು ಹುಬ್ಬಳ್ಳಿ-ಧಾರವಾಡದಿಂದ ಬೆಂಗಳೂರಿನ ಪರೀಕ್ಷಾ ಕೇಂದ್ರಗಳಿಗೆ ಬರುತ್ತಿದ್ದ ವೇಳೆಯಲ್ಲಿ ರೈಲುಗಳ ವಿಳಂಬದಿಂದಾಗಿ ಸುಮಾರು 2,000 ಅಭ್ಯರ್ಥಿಗಳಿಗೆ ಪರೀಕ್ಷೆಯನ್ನು ಬರೆಯಲು ಸಾಧ್ಯವಾಗಲಿಲ್ಲದಿದ್ದರೂ ಕೂಡ ಇಲಾಖೆಯು ಎಚ್ಚೆತ್ತುಕೊಳ್ಳದೆ ನಂತರದ ನೇಮಕಾತಿಗಳಲ್ಲಿ ಪರೀಕ್ಷಾ ಕೇಂದ್ರದ ಆಯ್ಕೆಗೆ ಇರುವ ಲೋಪದೋಷಗಳನ್ನು ಸರಿಪಡಿಸದೇ ಇರಲು ಕಾರಣವೇನು ? (ವಿವರ ನೀಡುವುದು)